# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 276

ಸದಸ್ಯರ ಹೆಸರು : ಶ್ರೀಮತಿ ತಾರಾ ಅನೂರಾಧ (ನಾಮ ನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ದಿನಾಂಕ : 12-07-2018

ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಪ್ರಾಥಮಿಕ, ಪ್ರೌಢ ಮತ್ತು ಪದವಿ ಪೂರ್ವ ಶಾಲಾ ಕಾಲೇಜುಗಳ ಶಿಕ್ಷಕರ/ಉಪನ್ಯಾಸಕರ ವರ್ಗಾವಣೆಯ ಕಾರ್ಯವು ಪ್ರಸ್ತುತ ಯಾವ ಹಂತದಲ್ಲಿದೆ; | 2017-18ನೇ ಸಾಲಿನ ರಾಜ್ಯ ಸರ್ಕಾರಿ ಪ್ರಾಥಮಿಕ/ಪ್ರೌಢ ಶಾಲಾ ಶಿಕ್ಷಕರ ಹಾಗೂ ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರ ವರ್ಗಾವಣಾ ಪ್ರಕ್ರಿಯೆಯನ್ನು ಕೌನ್ಸಿಲಿಂಗ್ ಮೂಲಕ ನಡೆಸಲು ಜನವರಿ 2018ರಲ್ಲಿ ವೇಳಾ ಪಟ್ಟಿಯನ್ನು ಪ್ರಕಟಿಸಲಾಗಿತ್ತು. ಆದರೆ, ಸಾರ್ವತ್ರಿಕ ಚುನಾವಣೆ ಹಿನ್ನೆಲೆಯಲ್ಲಿ ಮಾದರಿ ನೀತಿ ಸಂಹಿತೆ ಜಾರಿಯಾದ ಕಾರಣ ವರ್ಗಾವಣೆ ಪ್ರಕ್ರಿಯೆಯನ್ನು ಮುಂದೂಡಲಾಗಿತ್ತು. ಈ ಮಧ್ಯೆ ವರ್ಗಾವಣಾ ಅಧಿಸೂಚನೆಗೆ ರಾಜ್ಯ ಉಚ್ಚ ನ್ಯಾಯಾಲಯದಿಂದ ಕೆಲವು ಪ್ರಕರಣಗಳಲ್ಲಿ ತಡೆಯಾಜ್ಞೆ ಬಂದಿದ್ದು, ತಡೆಯಾಜ್ಞೆಯನ್ನು ತೆರವುಗೊಳಿಸಲು ಇಲಾಖೆಯಿಂದ ಅಗತ್ಯ ಕಾನೂನಾತ್ಮಕ ಕ್ರಮಗಳನ್ನು ಕೈಗೊಳ್ಳಲಾಗಿದೆ. |
| ಆ. | ಪ್ರಸಕ್ತ ಸಾಲಿನಲ್ಲಿ ವರ್ಗಾವಣೆ ಪ್ರಕ್ರಿಯೆಯಲ್ಲಿ ಅಳವಡಿಸಿಕೊಂಡಿರುವ ನಿಯಮಗಳೇನು; | ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣಾ ನಿಯಂತ್ರಣ) (ತಿದ್ದುಪಡಿ) ನಿಯಮಗಳು 2017 ದಿನಾಂಕ:29-11-2017ರ ನಿಯಮಗಳನ್ನು ಅಳವಡಿಸಿಕೊಳ್ಳಲಾಗಿದೆ. |
| ಇ. | ಯಾವ ಕಾರಣಕ್ಕಾಗಿ ವರ್ಗಾವಣೆ ಪ್ರಕ್ರಿಯೆಯು ವಿಳಂಬವಾಗಿದೆ; | ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಶಿಕ್ಷಕರ ವರ್ಗಾವಣೆ ಸಂಬಂಧ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ತಡೆಯಾಜ್ಞೆ ಜಾರಿಯಲ್ಲಿರುವುದರಿಂದ ವರ್ಗಾವಣೆ ಪ್ರಕ್ರಿಯೆ ವಿಳಂಬವಾಗಿದೆ.<br>ಪದವಿ ಪೂರ್ವ ಉಪನ್ಯಾಸಕರ ಕೌನ್ಸಲಿಂಗ್ ಸಂಬಂಧಪಟ್ಟಂತೆ, ಎ. ಬಿ, ಸಿ ವಲಯಗಳ ಗುರುತಿಸುವಿಕೆಗೆ ತಿದ್ದುಪಡಿ ಮಾಡಲು ಕ್ರಮವಹಿಸುತ್ತಿರುವುದರಿಂದ ಪ್ರಕ್ರಿಯೆ ವಿಳಂಬವಾಗಿದೆ. |
| ಈ. | ಈಗಾಗಲೇ ಜಾರಿಗೆ ತಂದಿರುವ ಹೊಸ ನಿಯಮದಲ್ಲಿ ಯಾವ ಯಾವ ನಿಯಮಗಳನ್ನು ಸಡಿಲಗೊಳಿಸಲು ಸರ್ಕಾರ ನಿರ್ಧರಿಸಿದೆ; | ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣಾ ನಿಯಂತ್ರಣ) (ತಿದ್ದುಪಡಿ) ನಿಯಮಗಳು 2017ರ ಈ ಕೆಳಕಂಡ ನಿಯಮಗಳನ್ನು ಸಡಿಲಗೊಳಿಸಲು ನಿರ್ಧರಿಸಲಾಗಿದೆ.<br>1. ಒಂದು ಘಟಕದ ಒಳಗೆ ಕೋರಿಕೆ ವರ್ಗಾವಣೆಗೆ ಅರ್ಜಿ ಸಲ್ಲಿಸಲು ಕನಿಷ್ಠ ಸೇವಾವಧಿ 5 ವರ್ಷಗಳನ್ನು ನಿಗಧಿಮಾಡಿರುವುದನ್ನು 3 ವರ್ಷಗಳಿಗೆ ನಿಗಧಿಪಡಿಸಲು.<br>2. ಕಡ್ಡಾಯ ವರ್ಗಾವಣೆಯಲ್ಲಿ Terminaly ill, ಕ್ಯಾನ್ಸರ್ ಮತ್ತು ಡಯಾಲಿಸಿಸ್ (ಕಿಡ್ನಿ) ಒಳಗಾಗಿರುವವರಿಗೆ ವಿನಾಯಿತಿ ನೀಡಲು. |

| | | |
|---|---|---|
| | | 3. ಎ.ಬಿ.ಸಿ ವಲಯಗಳ ಗುರುತಿಸಿರುವ ಸ್ಥಳಗಳನ್ನು ತಿದ್ದುಪಡಿತರಲು. |
| ಉ. | ಶಿಕ್ಷಕ/ಉಪನ್ಯಾಸಕರ ವರ್ಗಾವಣೆ ಪ್ರಕ್ರಿಯೆಯನ್ನು ಯಾವಾಗ ಪ್ರಾರಂಭ ಮಾಡಲು ಸರ್ಕಾರ ಚಿಂತಿಸಿದೆ? | ನ್ಯಾಯಾಲಯದ ತಡೆಯಾಜ್ಞೆ ತೆರವುಗೊಂಡ ನಂತರ ಹಾಗೂ ತಿದ್ದುಪಡಿಯನ್ನು ತರಲು . ಪ್ರಸ್ತಾಪಿಸಿರುವ ಅಂಶಗಳಿಗೆ ತಿದ್ದುಪಡಿ ತಂದು ಶೀಘ್ರವಾಗಿ ವರ್ಗಾವಣೆ ಕೌನ್ಸಲಿಂಗ್ ಪ್ರಾರಂಭಿಸಲು ಕ್ರಮ ತೆಗೆದುಕೊಳ್ಳಲಾಗುವುದು. |

ಇಡಿ 40 ಪಿಎಂಎ 2018

(ಎಸ್. ಮಹೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.